# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1974 (1644)
ಸದಸ್ಯರ ಹೆಸರು : ಡಾ|| ವೈ.ಎ.ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)
ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು
ಉತ್ತರಿಸುವ ದಿನಾಂಕ : 23.03.2021

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕೋಲಾರದಲ್ಲಿರುವ M/S: WISTRON INFOCOM MANUFACTURING (INDIA) Pvt. Ltd. ಎಂದಿನಿಂದ ಪ್ರಾರಂಭಗೊಂಡಿತ್ತು; ಈ ಕಂಪನಿಯಲ್ಲಿ ಹೂಡಿರುವ ಬಂಡವಾಳದ ಮೊತ್ತ ಎಷ್ಟು; ಕೆಲಸ ನಿರ್ವಹಿಸುತ್ತಿರುವ ನೌಕರರ ಸಂಖ್ಯೆ ಎಷ್ಟು' | ಕೋಲಾರ ಜಿಲ್ಲೆಯಲ್ಲಿರುವ ಮೆ: ವಿಸ್ಟ್ರಾನ್ ಇನ್‌ಫೋಕಾಂ ಮ್ಯಾನುಫ್ಯಾಕ್ಚರಿಂಗ್ (ಇಂಡಿಯಾ) ಪ್ರೈ ಲಿ., ಕಂಪನಿಯು ದಿನಾಂಕ 29.08.2020 ರಂದು ಪ್ರಾರಂಭವಾಗಿದ್ದು, ಒಟ್ಟು ರೂ.629.19 ಕೋಟಿ ಬಂಡವಾಳದೊಂದಿಗೆ 9833 ಜನಕ್ಕೆ ಉದ್ಯೋಗವನ್ನು ಕಲ್ಪಿಸಿರುತ್ತಾರೆ.<br>ದಿನಾಂಕ 12.12.2020 ರ ಘಟನೆ ನಂತರ ಅವರ ಉದ್ಯೋಗಿಗಳ (ಪೋಲಿಸ್ ದಾಖಲಾತಿ) ಪರಿಶೀಲನೆಯೊಂದಿಗೆ ಮರು ನೇಮಕಾತಿ ಪ್ರಕ್ರಿಯೆ ಜಾರಿಯಲ್ಲಿದ್ದು, ದಿನಾಂಕ 15.03.2021 ರವರೆಗೆ 3400 ಉದ್ಯೋಗಿಗಳನ್ನು ಮರುನೇಮಕಗೊಳಿಸಲಾಗಿರುತ್ತದೆ. |
| ಆ | ಈ ಕಂಪನಿಯು ಉತ್ಪಾದಿಸುವ ಉತ್ಪನ್ನಗಳು ಯಾವುವು; | ಸದರಿ ಕಂಪನಿಯಲ್ಲಿ Smart Phones, IOT Products and Biotech Devices ಉತ್ಪನ್ನಗಳ ತಯಾರಿಕೆಯಲ್ಲಿ ತೊಡಗಿರುತ್ತಾರೆ. |
| ಇ | ಸದರಿ ಕಂಪನಿಯಲ್ಲಿ ಗೊಂದಲ ಸೃಷ್ಟಿಯಾಗಿ, ಗಲಾಟೆಗಳಾಗಿ "ಲಾಕ್ ಡೌನ್" ಮಾಡಲು ಕಾರಣಗಳೇನು; ಇದರ ಹಿಂದೆ ಇರುವ ಶಕ್ತಿಗಳಾವುವು; ಇದರಿಂದಾಗಿ ಆಗಿರುವ ನಷ್ಟ ಎಷ್ಟು; | 1. ಉಪ ನಿರ್ದೇಶಕರು, ಕಾರ್ಖಾನೆಗಳು ಮತ್ತು ಬಾಯ್ಲರ್ ರವರ ಪ್ರಕಾರ ಸಂಸ್ಥೆಯು ತಮ್ಮ ಉದ್ಯೋಗಿಗಳ ಸಂಖ್ಯೆಯನ್ನು ಒಂದು ತಿಂಗಳ ಒಳಗಾಗಿ 5000 ರಿಂದ 10000 ರವರೆಗೆ ಹೆಚ್ಚಿಸಿದ್ದು, ಉದ್ಯೋಗಿಗಳ ಹಾಜರಾತಿ ದಾಖಲಿಸುವುದು ಸೂಕ್ತ ವ್ಯವಸ್ಥೆ ಇಲ್ಲದಿರುವ ಕಾರಣ ಪ್ರಮುಖ ವಿಷಯವಾಗಿರುತ್ತದೆ.<br>2. ಈ ಘಟನೆಯಿಂದ ಅಂದಾಜು ರೂ.50 ಕೋಟಿ ಸ್ಥಿರಾಸ್ಥಿ ನಷ್ಟ ಉಂಟಾಗಿದೆ ಎಂದು ಘಟಕದವರು ಮೌಖಿಕವಾಗಿ ತಿಳಿಸಿರುತ್ತಾರೆ. |
| ಈ | ಈ ಗಲಭೆ, ಗೊಂದಲದ ಬಗ್ಗೆ ಸತ್ಯಾಸತ್ಯತೆ ತಿಳಿಯಲು ಸರ್ಕಾರ ತನಿಖೆ ಪ್ರಾರಂಭಿಸಿದೆಯೇ? (ತನಿಖೆಯ ವಿವರಗಳನ್ನು ನೀಡುವುದು) | ಕಾರ್ಮಿಕ ಹಾಗೂ ಪೋಲಿಸ್ ಇಲಾಖೆಗಳು ಘಟನೆಯ ಕುರಿತು ಪರಿಶೀಲಿಸುತ್ತಿವೆ. |

ಸಿಐ 119 ಎಸ್‌ಪಿಐ 2021

(ಜಗದೀಶ್ ಶೆಟ್ಟರ)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು.